# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 564

ಸದಸ್ಯರ ಹೆಸರು : ಶ್ರೀಮತಿ ಎಸ್. ವೀಣಾ ಅಚ್ಚಯ್ಯ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 21-02-2022

ಉತ್ತರಿಸುವ ಸಚಿವರು : ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

***

| | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯಲ್ಲಿ ವಿವಿಧ ತರಹದ ಬೆಳೆಗಳನ್ನು ಬೆಳೆಯುವ ರೈತರು ಹಾಗೂ ಬೆಳೆಗಾರರಿಗೆ ರಾಜ್ಯದ ಇತರೆ ಭಾಗದ ರೈತರಿಗೆ ನೀಡುತ್ತಿರುವ ರೀತಿಯಲ್ಲಿಯೇ 10 ಹೆಚ್.ಪಿ. ವರೆಗಿನ ಐ.ಪಿ. ಸೆಟ್‌ಗಳಿಗೆ ಉಚಿತವಾಗಿ ವಿದ್ಯುತ್ ನೀಡಲಾಗುತ್ತಿದೆಯೇ; | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ವ್ಯಾಪ್ತಿಯಲ್ಲಿ ಸರ್ಕಾರದ ಆದೇಶದಂತೆ ಎಲ್.ಟಿ-4(ಎ) ಜಕಾತಿಯ, 10ಹೆಚ್‌ಪಿ ವರೆಗಿನ ಕೃಷಿ ನೀರಾವರಿ ಪಂಪ್‌ಸೆಟ್‌ಗಳಿಗೆ ಉಚಿತ ವಿದ್ಯುತ್ ಸೌಲಭ್ಯವನ್ನು ನೀಡಲಾಗುತ್ತಿದೆ. |
| ಆ) | ನೀಡದಿದ್ದಲ್ಲಿ, ಕೊಡಗಿನ ರೈತರು ಹಾಗೂ ಬೆಳೆಗಾರರಿಗೆ ಮಾತ್ರ ಉಚಿತ ವಿದ್ಯುತ್ ನೀಡದಿರಲು ಕಾರಣಗಳೇನು; | ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣಾ ಆಯೋಗದ ಆದೇಶಾನುಸಾರ ಖಾಸಗಿ ತೋಟಗಾರಿಕೆಗಳು, ಕಾಫಿ, ಟೀ ಮತ್ತು ರಬ್ಬರ್ ಪ್ಲಾಂಟೇಷನ್‌ಗಳಲ್ಲಿ ಉಪಯೋಗಿಸುವ ಎಲ್ಲಾ ಸಾಮರ್ಥ್ಯದ ನೀರಾವರಿ ಪಂಪ್‌ಸೆಟ್‌ಗಳಿಗೆ ನಿಯಮಾನುಸಾರ ಎಲ್.ಟಿ-4(ಸಿ) ಜಕಾತಿಯಲ್ಲಿ ವಿದ್ಯುತ್ ಬಿಲ್ ನೀಡಿ ಹಣ ಪಾವತಿಸುವಂತೆ ತಿಳಿಸಲಾಗಿರುತ್ತದೆ. |
| ಇ) | ನಿರಂತರ ಪ್ರಾಕೃತಿಕ ವಿಕೋಪ, ಬೆಳೆ ಹಾನಿ, ಬೆಲೆ ಕುಸಿತದಿಂದ ಸಂಕಷ್ಟದಲ್ಲಿರುವ ಜಿಲ್ಲೆಯ ಎಲ್ಲಾ ರೈತರು ಹಾಗೂ ಕಾಫಿ ಬೆಳೆಗಾರರಿಗೆ 10 ಹೆಚ್.ಪಿ. ವರೆಗಿನ ಐ.ಪಿ. ಸೆಟ್ ಗಳಿಗೆ ಉಚಿತ ವಿದ್ಯುತ್ ನೀಡಲು ಸರ್ಕಾರ ಕೂಡಲೇ ಕ್ರಮ ವಹಿಸುವುದೇ? | • ರಾಜ್ಯ ಸರ್ಕಾರದ ನೀತಿಯಂತೆ ರಾಜ್ಯದಲ್ಲಿನ ಎಲ್ಲಾ 10ಹೆಚ್‌ಪಿ ವರೆಗಿನ ಕೃಷಿ ನೀರಾವರಿ ಪಂಪ್‌ಸೆಟ್‌ಗಳಿಗೆ ಉಚಿತ ವಿದ್ಯುತ್ ಸೌಲಭ್ಯವನ್ನು ನೀಡಲಾಗುತ್ತಿದೆ.<br>• ಮಾನ್ಯ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ಕಾಫಿ ಬೆಳೆಗಾರರ ಹಿತದೃಷ್ಟಿಯಿಂದ ಆರ್ಥಿಕ ಹೊರೆಯಾಗದಂತೆ ಕಡಿಮೆ ದರದಲ್ಲಿ ಅಂದರೆ, 10 ಹೆಚ್.ಪಿ ಮತ್ತು ಅದಕ್ಕಿಂತ ಕಡಿಮೆ ಸಾಮರ್ಥ್ಯ ಹೊರೆಯನ್ನು ಹೊಂದಿರುವ ಕಾಫಿ ಬೆಳೆಗಾರರ ಪ್ರತಿ ಹೆಚ್.ಪಿ ಗೆ ಮಾಸಿಕ ನಿಗದಿತ ಶುಲ್ಕ ರೂ. 80/- ಹಾಗೂ ಪ್ರತಿ ಯೂನಿಟ್ ಬಳಕೆಗೆ ರೂ. 3.85 ಶುಲ್ಕವನ್ನು ವಿಧಿಸಲಾಗುತ್ತಿದ್ದು, ಈ ಪ್ರವರ್ಗದ ವಿದ್ಯುತ್ ಗ್ರಾಹಕರುಗಳ ವಿದ್ಯುತ್ ಶುಲ್ಕ ಪಾವತಿಗೆ ವಿನಾಯಿತಿ ನೀಡುವ ವಿಷಯವು ಸರ್ಕಾರದ ಪರಿಶೀಲನೆಯ ಹಂತದಲ್ಲಿದ್ದು, ಅಂತಿಮ ನಿರ್ಣಯ ಕೈಗೊಳ್ಳಬೇಕಾಗಿರುತ್ತದೆ. |

ಸಂಖ್ಯೆ: ಎನರ್ಜಿ 27 ಇಬಿಎಸ್ 2022

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು
ಸಂಸ್ಕೃತಿ ಸಚಿವರು